# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 198 |
| ಮಾನ್ಯ ಸದಸ್ಯರ ಹೆಸರು | ಶ್ರೀ ಕೆ. ಗೋವಿಂದ್ ರಾಜ್ (ವಿಧಾನಸಭೆಯಿಂದ ಚುನಾಯಿತರಾದವರು) |
| ಉತ್ತರಿಸುವ ಸಚಿವರು | ಮಾನ್ಯ ಉಪಮುಖ್ಯಮಂತ್ರಿಗಳು (ಉನ್ನತ ಶಿಕ್ಷಣ) |
| ಉತ್ತರಿಸಬೇಕಾದ ದಿನಾಂಕ | 01.02.2021 |

| | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದ ವಿಶ್ವವಿದ್ಯಾಲಯಗಳು ವಿದ್ಯಾರ್ಥಿಗಳ ಉತ್ತರ ಪತ್ರಿಕೆಗಳನ್ನು ಸ್ಕ್ಯಾನ್ ಮಾಡಿಕೊಡಲು ಖಾಸಗಿ ಕಂಪನಿಗಳಿಗೆ ಹೊರಗುತ್ತಿಗೆ ನೀಡುತ್ತಿರುವುದು ನಿಜವೇ; (ವಿಶ್ವವಿದ್ಯಾಲಯಗಳ 3 ವರ್ಷಗಳವಾರು ಪ್ರತ್ಯೇಕವಾದ ಸಂಪೂರ್ಣ ಮಾಹಿತಿ ಒದಗಿಸುವುದು); | ರಾಜ್ಯದ ಕೆಳಕಂಡ ವಿಶ್ವವಿದ್ಯಾನಿಲಯಗಳು ವಿದ್ಯಾರ್ಥಿಗಳ ಉತ್ತರ ಪತ್ರಿಕೆಗಳನ್ನು ಸ್ಕ್ಯಾನ್ ಮಾಡಿಕೊಡಲು ಖಾಸಗಿ ಕಂಪನಿಗಳಿಗೆ ಹೊರಗುತ್ತಿಗೆ ನೀಡುತ್ತಿವೆ; |

| ಕ್ರ ಸಂ. | ವಿಶ್ವವಿದ್ಯಾನಿಲಯದ ಹೆಸರು | ವರ್ಷ | ಖಾಸಗಿ ಕಂಪನಿಯ ಹೆಸರು |
|---|---|---|---|
| 1 | ದಾವಣಗೆರೆ ವಿಶ್ವವಿದ್ಯಾನಿಲಯ | ಮೇ/ಜೂನ್, 2018 | ಮೆ॥ ಮಣಿಪಾಲ್ ಟೆಕ್ನಾಲಜಿ ಲಿಮಿಟೆಡ್, ಮಣಿಪಾಲ್ |
| | | ನವೆಂಬರ್/ಡಿಸೆಂಬರ್, 2018 | ಮೆ॥ ಮೆಹರಾ ಕಂಪ್ಯೂಟರ್ ಸಿಸ್ಟಮ್ಸ್ ಲಿಮಿಟೆಡ್, ಇಂದಿರಾ ನಗರ, ಬೆಂಗಳೂರು. |
| | | ಮೇ/ಜೂನ್, 2019 | ಮೆ॥ ವಿ.ಎಸ್. ಐಟೆಕ್ ಸೆಕ್ಯೂರಿಟಿ ಫಾರಂಮ್ಸ್ ಪ್ರೈವೇಟ್ ಲಿಮಿಟೆಡ್, ಹೈದ್ರಾಬಾದ್ |
| | | ನವೆಂಬರ್/ಡಿಸೆಂಬರ್, 2019 | ಮೆ॥ ಲಾಜಿಸಿಸ್, ಬೆಂಗಳೂರು |
| | | ಮೇ/ಜೂನ್, 2020 | |
| | | ನವೆಂಬರ್/ಡಿಸೆಂಬರ್, 2020 | |
| 2 | ಬೆಂಗಳೂರು ವಿಶ್ವವಿದ್ಯಾಲಯ | ಮೇ/ಜೂನ್, 2018 | ಆಟ್ರಿಸ್ ಟೆಕ್ನೋಲಾಜೀಸ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು |
| | | ನವೆಂಬರ್, 2018 ರಿಂದ ಸೆಪ್ಟೆಂಬರ್, 2020ರವರೆಗೆ | ಟಿ.ಆರ್.ಎಸ್. ಫಾರ್ಮ್ಸ್ & ಸರ್ವೀಸಸ್, ಚೆನ್ನೈ |
| 3 | ಮಂಗಳೂರು ವಿಶ್ವವಿದ್ಯಾಲಯ | ಡಿಸೆಂಬರ್,2019/ ಜನವರಿ, 2020ರಲ್ಲಿ ನಡೆದ MBA 1 & | ಮೆ॥ ಮೆಟಾ. ಐ ಟೆಕ್ನಾಲಾಜೀಸ್ ಪ್ರೈ.ಲಿ. |

| | | | |
|---|---|---|---|
| | | 3ನೇ ಸೆಮಿಸ್ಟರ್ ಪರೀಕ್ಷೆಗಳ ಉತ್ತರ ಪತ್ರಿಕೆಗಳನ್ನು ಪ್ರಾಯೋಗಿಕ ನೆಲೆಯಲ್ಲಿ ಡಿಜಿಟಲ್ ಮೌಲ್ಯಮಾಪನ ವಿಧಾನದಿಂದ ನಿರ್ವಹಿಸಿರುತ್ತಾರೆ | |
| 4 | ಮೈಸೂರು ವಿಶ್ವವಿದ್ಯಾನಿಲಯ | ಅಕ್ಟೋಬರ್/ನವೆಂಬರ್, 2019 ರಿಂದ ಏಪ್ರಿಲ್ /ಮೇ 2023ರವರೆಗೆ | ಮೆ॥ ಮೆಟಾ. ಐ ಟೆಕ್ನಾಲಾಜೀಸ್ ಪ್ರೈ.ಲಿ., ಬೆಂಗಳೂರು. |
| 5 | ಗುಲ್ಬರ್ಗ ವಿಶ್ವವಿದ್ಯಾಲಯ | ಮೇ, 2019ರಿಂದ | ಮೆ॥ ಲಾಜಿಸಿಸ್ ಖಾಸಗಿ ಕಂಪನಿ, ಬೆಂಗಳೂರು |

ರಾಜ್ಯದ ಉಳಿದ ವಿಶ್ವವಿದ್ಯಾನಿಲಯಗಳು ಉತ್ತರ ಪತ್ರಿಕೆಗಳ ಸ್ಕ್ಯಾನಿಂಗ್ ಕಾರ್ಯವನ್ನು ಖಾಸಗಿ ಸಂಸ್ಥೆಗಳಿಗೆ ವಹಿಸಿರುವುದಿಲ್ಲ.

<table>
<tr><td>(ಆ)</td><td>ಬೆಂಗಳೂರು ವಿಶ್ವವಿದ್ಯಾಲಯ ಪರೀಕ್ಷಾ ಉತ್ತರ ಪತ್ರಿಕೆಗಳ ಸ್ಕ್ಯಾನಿಂಗ್‌ಗಾಗಿ ಖಾಸಗಿ ಕಂಪನಿಗೆ ಹೊರಗುತ್ತಿಗೆ ನೀಡಿದ್ದು ನಿಜವೇ; ಹಾಗಿದ್ದಲ್ಲಿ, ಸಂಸ್ಥೆಯ ಹೆಸರು, ಸ್ಕ್ಯಾನಿಂಗ್ ಮಾಡಲಾದ ಪುಟಗಳ ಸಂಖ್ಯೆ, ಪಾವತಿಸಲಾದ ಹಣ ಕುರಿತಾದ ಸಂಪೂರ್ಣ ಮಾಹಿತಿಯನ್ನು ಪ್ರತ್ಯೇಕವಾಗಿ ಒದಗಿಸುವುದು;</td><td>ಹೌದು.<br>➢ <u>ಸಂಸ್ಥೆಯ ವಿವರ:</u>
<table>
<tr><td>ಮೇ/ಜೂನ್, 2018ರಿಂದ</td><td>ಆಟ್ರಿಸ್ ಟೆಕ್ನೋಲಾಜೀಸ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು</td></tr>
<tr><td>ನವೆಂಬರ್, 2018 ರಿಂದ ಸೆಪ್ಟೆಂಬರ್, 2020ರವರೆಗೆ</td><td>ಟಿ.ಆರ್.ಎಸ್. ಫಾರ್ಮ್ಸ್ & ಸರ್ವೀಸಸ್, ಚೆನ್ನೈ.</td></tr>
</table>
➢ ಸ್ಕ್ಯಾನಿಂಗ್ ಮಾಡಲಾದ ಪುಟಗಳ ಸಂಖ್ಯೆ: 50,35,479<br>➢ ಪಾವತಿಸಲಾದ ಮೊತ್ತ ರೂ. 1,18,87,770/-</td></tr>
<tr><td>(ಇ)</td><td>ಸ್ಕ್ಯಾನಿಂಗ್‌ಗಾಗಿ ಹೊರಗುತ್ತಿಗೆ ಪಡೆಯಲಾದ ಸಂಸ್ಥೆಯು ಅಕ್ರಮದಲ್ಲಿ ಭಾಗಿಯಾಗಿ ವಿದ್ಯಾರ್ಥಿಗಳ ಅಂಕಪಟ್ಟಿಯಲ್ಲಿ ತಿದ್ದುಪಡಿ ಮಾಡಿರುವ ಅಂಶವನ್ನು ಸರ್ಕಾರ ಗಂಭೀರವಾಗಿ ಪರಿಗಣಿಸಿದೆಯೇ; ಹಾಗಿದ್ದಲ್ಲಿ, ಈ ಅಕ್ರಮದಲ್ಲಿ ಭಾಗಿಯಾದ ವ್ಯಕ್ತಿಗಳು, ಅಧಿಕಾರಿಗಳು/ಸಿಬ್ಬಂದಿ ಮತ್ತು</td><td>ಪರಿಗಣಿಸಿದೆ.<br><br>ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಸೆಪ್ಟೆಂಬರ್/ಅಕ್ಟೋಬರ್, 2020ರಲ್ಲಿ ಜರುಗಿದ ಸ್ನಾತಕ ಪದವಿ ಪರೀಕ್ಷೆಗಳ ಫಲಿತಾಂಶವನ್ನು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸುವ ಸಂದರ್ಭದಲ್ಲಿ ಮೆ॥ ಟಿ.ಆರ್.ಎಸ್. ಫಾರಂ ಅಂಡ್ ಸರ್ವೀಸ್ ಪ್ರೈ.ಲಿ. ಚೆನ್ನೈ ಮತ್ತು ಬೆಂಗಳೂರು, ಇಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಕೆಲವು ಸಿಬ್ಬಂದಿಗಳಿಂದ 804 ಉತ್ತರ ಪತ್ರಿಕೆಗಳ ಅಂಕಗಳನ್ನು ತಿರುಚಿರುವುದಾಗಿ ಮೇಲ್ನೋಟಕ್ಕೆ ಕಂಡುಬಂದಿದ್ದರಿಂದ ಸದರಿ ಸಂಸ್ಥೆಯ ಮೇಲೆ ವಿಶ್ವವಿದ್ಯಾನಿಲಯವು ದಿನಾಂಕ:03.01.2021ರಂದು ಜ್ಞಾನಭಾರತಿ ಪೋಲೀಸ್ ಠಾಣೆಯಲ್ಲಿ<br>03-01-2021</td></tr>
</table>

| | | |
|---|---|---|
| | ಸಂಸ್ಥೆಯ ವಿರುದ್ಧ ಕೈಗೊಂಡ ಕ್ರಮಗಳೇನು; (ಪ್ರತ್ಯೇಕವಾಗಿ ವಿವರ ಒದಗಿಸುವುದು) | ದೂರನ್ನು ದಾಖಲಿಸಿರುತ್ತದೆ.<br><br>ಈ ಕುರಿತಂತೆ ದಿನಾಂಕ: 05.01.2021ರಂದು ಬೆಂಗಳೂರು ವಿಶ್ವವಿದ್ಯಾನಿಲಯವು ಸಿಂಡಿಕೇಟ್ ಸಭೆಯಲ್ಲಿ ಸದರಿ ವಿದ್ಯಾರ್ಥಿಗಳ ಫಲಿತಾಂಶವನ್ನು ಹಿಂಪಡೆದು ಈಗಾಗಲೇ ವಿತರಿಸಿರುವ ಅಂಕಪಟ್ಟಿಗಳನ್ನು ಹಿಂಪಡೆಯುವುದು ಮತ್ತು ಅಂಕಪಟ್ಟಿಗಳನ್ನು ತಿರುಚಿರುವ ಬಗ್ಗೆ ತಾಂತ್ರಿಕ ತಜ್ಞ ಸಮಿತಿಯಿಂದ ತನಿಖೆ ನಡೆಸುವುದು, IT & Performance Audit by C & AG of India ದಿಂದ ಪರಿಶೋಧನೆ ನಡೆಸುವುದು ಮತ್ತು ಸದರಿ ತನಿಖೆಯನ್ನು ಸಿ.ಐ.ಡಿ.ಗೆ ವಹಿಸಲು ನಿರ್ಣಯಿಸಿ, ಪ್ರಕರಣವನ್ನು ತನಿಖೆಗಾಗಿ ಸಿ.ಐ.ಡಿ. ಗೆ ವಹಿಸಲು ಸರ್ಕಾರವನ್ನು ಕೋರಿರುತ್ತದೆ. ವಿಶ್ವವಿದ್ಯಾನಿಲಯದ ಪ್ರಸ್ತಾವನೆಯು ಸರ್ಕಾರದಲ್ಲಿ ಪರಿಶೀಲನೆಯಲ್ಲಿದೆ. |
| (ಈ) | ಮುಂದಿನ ದಿನಗಳಲ್ಲಿ ಈ ರೀತಿಯಾಗಿ ಅಕ್ರಮ ತಡೆಯಲು ಕೈಗೊಂಡ ದೀರ್ಘಾವಧಿ ಕ್ರಮ ಮತ್ತು ಸರ್ಕಾರದ ಆಲೋಚನೆ ಏನು? (ವಿವರ ಒದಗಿಸುವುದು) | ಬೆಂಗಳೂರು ವಿಶ್ವವಿದ್ಯಾಲಯ 2021ನೇ ಶೈಕ್ಷಣಿಕ ಸಾಲಿನಿಂದ ಪ್ರಾರಂಭವಾಗುವ ಪರೀಕ್ಷೆಗಳ ಮೌಲ್ಯಮಾಪನ ಕಾರ್ಯಕ್ರಗಳನ್ನು ಡಿಜಿಟಲೈಸೇಷನ್ ಮಾಡಲು ನಿರ್ಧರಿಸಿದ್ದು, ಉತ್ತರ ಪತ್ರಿಕೆಗಳ ಸ್ಕ್ಯಾನಿಂಗ್ ಕಾರ್ಯವನ್ನು ಖುದ್ದಾಗಿ ಬೆಂಗಳೂರು ವಿಶ್ವವಿದ್ಯಾನಿಲಯವೇ (In –house) ನಿರ್ವಹಿಸಲು ಉದ್ದೇಶಿಸಿದೆ.<br><br>ಸರ್ಕಾರದ ಆದೇಶ ಸಂಖ್ಯೆ: ಇಡಿ 08 ಇಜಿಒವಿ 2019, ದಿನಾಂಕ: 15.06.2019ರ ಆದೇಶದಲ್ಲಿ ರಾಜ್ಯದ ವಿಶ್ವವಿದ್ಯಾನಿಲಯಗಳಲ್ಲಿ ಮೌಲ್ಯಮಾಪನದಲ್ಲಿ ಆಗುತ್ತಿರುವ ಗೊಂದಲಗಳನ್ನು ತಪ್ಪಿಸಲು, ಪರೀಕ್ಷಾ ಪದ್ಧತಿಯಲ್ಲಿ, ಪಾರದರ್ಶಕತೆಯನ್ನು ಹೆಚ್ಚಿಸಲು ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯದಲ್ಲಿ ಸ್ಥಳೀಯವಾಗಿ ಅಭಿವೃದ್ಧಿಪಡಿಸಿರುವ Online Digital Evaluation System (ODES) ತಂತ್ರಾಂಶವನ್ನು ರಾಜ್ಯದ ಇತರೆ ವಿಶ್ವವಿದ್ಯಾಲಯಗಳಲ್ಲಿ ಅನುಷ್ಠಾನಗೊಳಿಸಲು ಆದೇಶಿಸಿದೆ. |

ಸಂಖ್ಯೆ: ಇಡಿ 42 ಯುಎನ್ಇ 2021

(ಡಾ: ಅಶ್ವಥ್ ನಾರಾಯಣ ಸಿ.ಎನ್.)
ಉಪ ಮುಖ್ಯಮಂತ್ರಿಗಳು
(ಉನ್ನತ ಶಿಕ್ಷಣ, ಐಟಿ ಬಿಟಿ, ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆ)